

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 173 |
| ವಿಧಾನ ಪರಿಷತ್ತ್ ಸದಸ್ಯರ ಹೆಸರು | : | ಶ್ರೀ ಆರ್. ಧರ್ಮಸೇನ |
| ಉತ್ತರಿಸುವ ದಿನಾಂಕ | : | 07-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಸಮಾಜ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಕಳೆದ ಮೂರು ವರ್ಷಗಳಲ್ಲಿ ನಿರ್ಮಿಸಿರುವ ಅಂಬೇಡ್ಕರ್ ಭವನ, ಜಗಜೀವನರಾಂ ಭವನ ಮತ್ತು ವಾಲ್ಮೀಕಿ ಭವನಗಳ ಸಂಖ್ಯೆ ಎಷ್ಟು; ಎಷ್ಟು ಭವನಗಳು ಅಪೂರ್ಣವಾಗಿವೆ; ಈ ಭವನಗಳನ್ನು ನಿರ್ವಹಣೆ ಮಾಡುವವರು ಯಾರು; | 2017-18ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಸಮಾಜ ಕಲ್ಯಾಣ ಇಲಾಖೆ ಹಾಗೂ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಿಗೆ ಮಂಜೂರು ಮಾಡಲಾದ ಡಾ॥ ಬಿ.ಆರ್ ಅಂಬೇಡ್ಕರ್ / ಡಾ॥ ಬಾಬು ಜಗಜೀವನರಾಮ್ ಮತ್ತು ಮಹರ್ಷಿ ವಾಲ್ಮೀಕಿ ಸಮುದಾಯ ಭವನಗಳ ಪ್ರಗತಿ ವಿವರ ಅನುಬಂಧದಲ್ಲಿ ನೀಡಿದೆ.<br><br>ಸರ್ಕಾರದ ಆದೇಶ ಸಂ: ಸಕಇ 338 ಪಕವಿ 2018, ದಿನಾಂಕ:25-03-2019 ರಲ್ಲಿ ಭವನಗಳ ನಿರ್ಮಾಣ ಕಾರ್ಯಕ್ರಮಕ್ಕೆ ಮಾರ್ಗಸೂಚಿಗಳನ್ನು ರಚಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಇಲಾಖೆಯ ವತಿಯಿಂದ ಮಂಜೂರಾತಿ ನೀಡಲಾದ ಗ್ರಾಮ, ಹೋಬಳಿ, ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದ ಭವನಗಳ ನಿರ್ವಹಣೆಗೆ ಈ ಕೆಳಕಂಡಂತೆ ಸಮಿತಿಗಳನ್ನು ರಚಿಸಲಾಗಿರುತ್ತದೆ.<br><br>ಗ್ರಾಮ ಮಟ್ಟದ ಭವನಗಳು — ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ಅಧ್ಯಕ್ಷತೆಯಲ್ಲಿನ ಸಮಿತಿ<br>ಹೋಬಳಿ ಮತ್ತು ತಾಲ್ಲೂಕು ಮಟ್ಟದ ಭವನಗಳು — ತಹಶೀಲ್ದಾರ್ ರವರ ಅಧ್ಯಕ್ಷತೆಯಲ್ಲಿನ ಸಮಿತಿ<br>ಜಿಲ್ಲಾ ಮಟ್ಟದ ಭವನಗಳು — ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಸಮಿತಿ |
| ಆ | ಈ ಭವನಗಳ ನಿರ್ಮಾಣಕ್ಕೆ ಬೇಕಾದ ಅನುದಾನವನ್ನು ಒದಗಿಸುವುದಾಗಿ ಮಾನ್ಯ ಮಂತ್ರಿಗಳು ಈ ಹಿಂದೆ ಭರವಸೆ ನೀಡಿದ್ದರೂ ಭವನಗಳು ಪೂರ್ಣವಾಗಿ ನಿರ್ಮಾಣವಾಗದಿರಲು ಕಾರಣವೇನು; | 2018-19 ಮತ್ತು 2019-20ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಿಂದ ಸಂಬಂಧಪಟ್ಟ ವಿಧಾನಸಭಾ ಕ್ಷೇತ್ರಗಳಿಗೆ ಭವನಗಳನ್ನು ಮಂಜೂರು ಮಾಡಲಾಗಿದ್ದು, ಈ ಸಂಬಂಧವಾಗಿ, ಮಾನ್ಯ ವಿಧಾನಸಭಾ ಸದಸ್ಯರುಗಳು ಭವನಗಳನ್ನು ನಿರ್ಮಾಣ ಮಾಡಬೇಕಾಗಿರುವ ಗ್ರಾಮಗಳನ್ನು ಗುರುತಿಸಿದ ನಂತರ, ಸದರಿ ಗ್ರಾಮಗಳಲ್ಲಿ ನಿವೇಶನಗಳನ್ನು ಪಡೆದು, ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿರುತ್ತದೆ.<br><br>ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ ಮಂಜೂರು ಮಾಡಲಾಗಿರುವ 62 ಭವನಗಳಿಗೆ ನಿವೇಶನಗಳನ್ನು ಪಡೆಯಲಾಗಿದ್ದು, ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. |

| | | |
|---|---|---|
| | | ಚಾಮರಾಜನಗರ ಜಿಲ್ಲೆಗೆ ಸಂಬಂಧಿಸಿದಂತೆ, 30 ಭವನಗಳ ಪೈಕಿ, 07 ಭವನಗಳಿಗೆ ನಿವೇಶನಗಳನ್ನು ಪಡೆಯಲಾಗಿದ್ದು, ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. ಬಾಕಿ 23 ಭವನಗಳ ನಿರ್ಮಾಣ ಸಂಬಂಧವಾಗಿ ಗ್ರಾಮಗಳನ್ನು ಗುರುತಿಸುವುದು ಬಾಕಿ ಇರುತ್ತದೆ. ಉಳಿದಂತೆ, ಗ್ರಾಮಗಳನ್ನು ಗುರುತಿಸಿದ ನಂತರ ನಿವೇಶನಗಳನ್ನು ಪಡೆದು, ಕಾಮಗಾರಿಗಳನ್ನು ಪ್ರಾರಂಭಿಸಲು ಕ್ರಮವಹಿಸಲಾಗುವುದು. |
| (ಇ) | ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಯೋಜನೆಯ ಹಣವನ್ನು ಒದಗಿಸಿ ಈ ಭವನಗಳ ನಿರ್ಮಾಣ ಮತ್ತು ನಿರ್ವಹಣೆ ಮಾಡಲು ಸರ್ಕಾರಕ್ಕಿರುವ ತೊಂದರೆಗಳೇನು; | ಭವನಗಳ ಭೌತಿಕ ಮತ್ತು ಆರ್ಥಿಕ ಪ್ರಗತಿಯ ವರದಿಯನ್ನು ಆಧರಿಸಿ, ಮಂಜೂರಾತಿ ಮೊತ್ತಕ್ಕೆ ಅನುಗುಣವಾಗಿ ಬಾಕಿ ಅನುದಾನವನ್ನು ಬಿಡುಗಡೆ ಮಾಡುವ ಮೂಲಕ ಪ್ರಗತಿಯಲ್ಲಿರುವ ಭವನಗಳ ನಿರ್ಮಾಣ ಕಾಮಗಾರಿಗಳನ್ನು ಪೂರ್ಣಗೊಳಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದು. |
| (ಈ) | ಈ ಜಿಲ್ಲೆಗಳಿಗೆ ಅಗತ್ಯವಾಗಿ ಬೇಕಾಗಿರುವ ಭವನಗಳನ್ನು ಅದಷ್ಟು ಬೇಗ ನಿರ್ಮಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | |
| (ಉ) | ಯಾವ ಕಾಲಮಿತಿಯೊಳಗೆ ಸದರಿ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದು? | |

ಸಕಇ 463 ಪಕವಿ 2020

(ಬಿ. ಶ್ರೀರಾಮುಲು)
ಮಾನ್ಯ ಸಮಾಜ ಕಲ್ಯಾಣ ಸಚಿವರು.

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:-173ಕ್ಕೆ ಅನುಬಂಧ

2017-18ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಿಗೆ ಮಂಜೂರು ಮಾಡಲಾದ ಡಾ|| ಬಿ.ಆರ್ ಅಂಬೇಡ್ಕರ್ / ಡಾ|| ಬಾಬು ಜಗಜೀವನರಾಮ್ / ವಾಲ್ಮೀಕಿ ಸಮುದಾಯ ಭವನಗಳ ಪ್ರಗತಿ ವಿವರ

| ಕ್ರ. ಸಂ | ಜಿಲ್ಲೆ | ಮಂಜೂರಾದ ಭವನಗಳ ಸಂಖ್ಯೆ | | | | ಪೂರ್ಣಗೊಂಡ ಭವನಗಳ ಸಂಖ್ಯೆ | ಪ್ರಗತಿಯಲ್ಲಿರುವ ಭವನಗಳ ಸಂಖ್ಯೆ | | | | ಕಾಮಗಾರಿ ಪ್ರಾರಂಭಿಸಬೇಕಿರುವ ಭವನಗಳ ಸಂಖ್ಯೆ | | | |
|---|---|---|---|---|---|---|---|---|---|---|---|---|---|---|
| | | ಅಂಬೇಡ್ಕರ್ ಭವನ | ಜಗಜೀವನ ರಾಮ್ ಭವನ | ವಾಲ್ಮೀಕಿ ಭವನ | ಒಟ್ಟು | | ಅಂಬೇಡ್ಕರ್ ಭವನ | ಜಗಜೀವನರಾಮ್ ಭವನ | ವಾಲ್ಮೀಕಿ ಭವನ | ಒಟ್ಟು | ಅಂಬೇಡ್ಕರ್ ಭವನ | ಜಗಜೀವನರಾಮ್ ಭವನ | ವಾಲ್ಮೀಕಿ ಭವನ | ಒಟ್ಟು |
| 1 | ಮೈಸೂರು | 54 | 8 | 114 | 176 | 22 | 54 | 8 | 92 | 154 | 0 | 0 | 0 | 0 |
| 2 | ಚಾಮರಾಜನಗರ | 24 | 6 | 3 | 33 | 0 | 6 | 1 | 3 | 10 | 18 | 5 | 0 | 23 |